ಒಂದಾಣೆ ಮಾಲೆ 277

# ತಿಲೋತ್ತಮೆ

ಅಥವಾ

# ಸುಂದೋಪಸುಂದ

(ಏಕಾಂಕ ನಾಟಕ)



ರಚಯಿತ:

'ರಸಿಕ', ಪುತ್ತಿಗೆ.



1960

ಬೆಲೆ: ೧ ಆಣೆ.

ಒಂದಾಣೆ ಮಾಲೆ — ಮಂಗಳೂರು.

## ಪ್ರತಿ ವಾರವೂ ಕೊಂಡುಕೊಳ್ಳಿರಿ!

"ಒಂದಾಣೆ ಮಾಲೆ"ಯ ಪುಸ್ತಕಗಳು, ಪ್ರತಿ ವಾರ ಪ್ರಕಟವಾಗುತ್ತಿವೆ. ಹೊಸ ಹೊಸ ವಿಷಯಗಳ ಮೇಲೆ ಪುಸ್ತಕಗಳು ಹೊರಡುತ್ತಿವೆ. 1954ನೇ ಸಪ್ಟಂಬರದಿಂದ 1960ನೇ ಜೂನ್ ತಿಂಗಳ ನಾಲ್ಕನೆಯ ವಾರದ ವರೆಗೆ 277 ಪುಸ್ತಕಗಳು ಪ್ರಕಟವಾಗಿದ್ದು, ಇನ್ನೂ ಪ್ರತಿ ವಾರ ಒಂದೊಂದು ಹೊಸ ಪುಸ್ತಕವು ಹೊರಡುತ್ತಲೇ ಇದೆ.

277 ಆಣೆಗಳಿಗೆ 'ಒಂದಾಣೆ ಮಾಲೆ'ಯು, ಹೊದಿಕೆ ಕೂಡಿ, ಒಟ್ಟು 5834 ಪುಟಗಳನ್ನು ಕೊಟ್ಟಿರುತ್ತದೆ. ಇಷ್ಟು ಮೊಬಲಗಿಗೆ ಇಷ್ಟು ಪುಟಗಳನ್ನು ಬೇರೆ ಎಲ್ಲಿಯೂ ಯಾವ ಪ್ರಕಟಣೆಯೂ ಕೊಟ್ಟಿಲ್ಲ.

ವಿದ್ವಾಂಸರು ಮಾತ್ರ 'ಒಂದಾಣೆ ಮಾಲೆ'ಗೆ ಬರೆಯುತ್ತಾರೆ. 'ಅಶ್ಲೀಲ' ಎಂಬ ಅಂಶವೇ 'ಒಂದಾಣೆ ಮಾಲೆ'ಯ ಪ್ರಕಟಣೆಗಳಲ್ಲಿರುವುದಿಲ್ಲ.

'ಒಂದಾಣೆ ಮಾಲೆ' ಪುಸ್ತಕಗಳು ಚಿಕ್ಕ ವಿದ್ಯಾರ್ಥಿಗಳಿಂದ ವಯೋವೃದ್ಧರ ವರೆಗೆ, ಪ್ರತಿಯೊಬ್ಬನಿಗೂ ಅವಶ್ಯ ಇವೆ. ಇಷ್ಟು ಸುಲಭ ಬೆಲೆಯಲ್ಲಿ ಇಷ್ಟು ಉತ್ತಮ ಸಾಹಿತ್ಯವು, ಈ ಮೊದಲು ಎಲ್ಲಿಯೂ ಒದಗಿಸಲ್ಪಟ್ಟಿಲ್ಲ.

'ಒಂದಾಣೆ ಮಾಲೆ' ಪುಸ್ತಕಗಳನ್ನು ಟಪ್ಪಾಲು ದ್ವಾರಾ ತರಿಸಿಕೊಳ್ಳುವವರು ರೂ. 4—8—0ನ್ನು ಮನಿಯಾರ್ಡರ್ ಮೂಲಕ ಕಳಿಸತಕ್ಕದ್ದು. ಡಿಪಾಜಿಟ್ ಇಡುವವರು ಮಾತ್ರ ಏಜನ್ಸಿಗಾಗಿ ಬರೆದುಕೊಳ್ಳತಕ್ಕದ್ದು.

ವಾರಕ್ಕೆ ಕೇವಲ ಒಂದಾಣೆ ವ್ಯಯದಿಂದ ಒಂದು ಉತ್ಕೃಷ್ಟ—ಉಪಯುಕ್ತ ಪುಸ್ತಕವನ್ನು ಹೊಂದುವ ಈ ಯೋಜನೆಯ ಸದುಪಯೋಗ ಮಾಡಿಕೊಳ್ಳಿರಿ.

ಒಂದಾಣೆ ಮಾಲೆ, ಪ್ರಭಾತ ಆಫೀಸು, ರಥಬೀದಿ,
ಮಂಗಳೂರು-1.

ANNA PUBLICATIONS, CAR STREET, MANGALORE-1.

# ಮೊದಲ ಮಾತು

ಸಹೃದಯವಾಚಕರಲ್ಲಿ ವಿನಂತಿ.

ಒಂದಾಣೆ ಮಾಲೆಯವರು ಆಗಾಗ ನನ್ನ— ನಿಮ್ಮ ಸಂಪರ್ಕ ಒದಗಿಸುತ್ತಿರುವುದಕ್ಕಾಗಿ ಅವರಿಗೆ ಮೊದಲು ಕೃತಜ್ಞತೆಯನ್ನು ಅರ್ಪಿಸುತ್ತೇನೆ.

ಪ್ರಕೃತ ನಾಟಕವಾದ ತಿಲೋತ್ತಮೆ (ಸುಂದೋಪಸುಂದ)ಯಲ್ಲಿ ಕಥಾಸಂವಿಧಾನಕ್ಕಿಂತ ನನ್ನ ಕಲ್ಪನೆಗೆ ಹೆಚ್ಚು ಪುಟವಿತ್ತಿದ್ದೇನೆ. ಈ ನಾಟಕದ ವಸ್ತುವಿನಿಂದ ಗಂಭೀರವಾದ ನಾಟಕ ಒಂದನ್ನು ರಚಿಸುವುದು ಸಾಧ್ಯವಿದೆಯಾದರೂ, ಗಂಭೀರ ನಾಟಕ ರಚಿಸುವುದು ನನ್ನ ಈಗಿನ ಉದ್ದೇಶವಲ್ಲ.

ಶಾಲೆಗಳಲ್ಲಿ ಹುಡುಗರೂ, ಹೊರಗೆ ಶಿಕ್ಷಣ ಪಡೆದ ವಯಸ್ಕರೂ ಈ ನಾಟಕವನ್ನು ಅರ್ಧಗಂಟೆ ಕಾಲದ ಮನರಂಜನೆಗಾಗಿ ಬಳಸಿಕೊಳ್ಳಲೆಂಬುದೇ ಆಸೆ "ವಂದಿಮಾಗದರು ಹೊಗಳುವರು" ಎಂಬಲ್ಲಿ ಹೊಗಳಿಕೆ ಬರೆದಿಲ್ಲ. ಅದನ್ನು ಅಭಿನಯಕಾರರ ಸೇರಿಸಿಕೊಳ್ಳಬೇಕು. ಅಂತೇ ಮೂರನೇ ದೃಶ್ಯ ಎಂಬಲ್ಲಿ "ಕೆಲವು ಬ್ರಾಹ್ಮಣರನ್ನು ಪೀಡಿಸುವರು" ಎಂದು ಮಾತ್ರ ಬರೆದಿದ್ದೇನೆ. ಇದನ್ನು ಅಭಿನಯಕಾರರು ಸಂದರ್ಭಕ್ಕೆ ತಕ್ಕಂತೆ ಬಳಸಿಕೊಳ್ಳಬಹುದು. ಅಂತೇ ನಾಟಕದ ಕೊನೆಗೆ ಬೇಕಾದರೆ ಯಾವುದಾದರೂ ದೇವರ ನಾಮವನ್ನು ತಿಲೋತ್ತಮೆಯು ಹಾಡಲೂ ಬಹುದು ಇಂತಹ ಅವಕಾಶಗಳನ್ನು ಇಟ್ಟೇ ಈ ನಾಟಕ ಬರೆದಿದ್ದೇನೆ.

ಇಂತು ಸಜ್ಜನಸೇವಕ,

**'ರಸಿಕ', ಪುತ್ತಿಗೆ.**

ನ್ಯೂ ಇಂಗ್ಲೀಷ್ ಹೈಸ್ಕೂಲ್, ಭಟ್ಕಳ ಉ. ಕ.



# ತಿಲೋತ್ತಮೆ

ಅಥವಾ

# ಸುಂದೋಪಸುಂದ

## (ಏಕಾಂಕ ನಾಟಕ)

.........

### ಪಾತ್ರವರ್ಗ:—

ಸುಂದ. ಉಪಸುಂದ. ತಿಲೋತ್ತಮೆ. ಇಂದ್ರ. ಬ್ರಹ್ಮ. ಬ್ರಹಸ್ಪತಿ. ವಿಶ್ವಕರ್ಮ. ಆಸ್ಥಾನಕವಿ. ಇಬ್ಬರು ಸೇವಕರು. ಬ್ರಾಹ್ಮಣರು: ಋಷಿಗಳು. ದೇವತೆಗಳು.

### ಮೊದಲನೆಯ ದೃಶ್ಯ.

(ಆಸ್ಥಾನ. ವಂದಿಮಾಗಧರು ಹೊಗಳುತ್ತಾರೆ.)

ಸುಂದ: ಶಂಭೋ ಮಹಾದೇವ! ಕಾಪಾಡು, ಕಾಪಾಡು! ತಮ್ಮಾ, ಉಪಸುಂದಾ! ನಮ್ಮ ತೀರ್ಥರೂಪರಾದ ನಿಕುಂಭಾಸುರರು ಈ ಶೋಣಿತ ನಗರದ ಅಧಿಕಾರವನ್ನು ನಮ್ಮ ಕೈಗಿತ್ತು ಶಿವಲೋಕ ಸೇರಿದರು. ಇಂದಿಗೆ ನಾವು ಸಹೋದರರು, ಜಗತ್ತನ್ನೆ ಗೆಲ್ಲುವ ವೀರರಾಗಬೇಕಾಗಿದೆ. ಅಂತೆಯೇ ನಮ್ಮ ಚಿಕ್ಕಮ್ಮನ ಮಕ್ಕಳಾದ ದೇವತೆಗಳ ಕೈಯಲ್ಲಿ ಸೇರಿದ ಸ್ವರ್ಗದ ಸಂಪತ್ತನ್ನು ಸೂರೆಗೊಳ್ಳಬೇಕಾಗಿದೆ. ನಿನ್ನ ಅಭಿಪ್ರಾಯವೇನು?

ಉಪಸುಂದ: ಅಣ್ಣಾ, ನಿನ್ನ ಮಾತಿಗೆ ನನ್ನ ಪ್ರತಿ ಇದೆಯೇ? ಜಗತ್ತಿನಲ್ಲಿ ಇಂದಿಗೆ ಸುಂದೋಪಸುಂದರಂತಹ ಆದರ್ಶ ಸಹೋದರರು ಯಾರಿದ್ದಾರೆ? ಅಂತೆಯೇ ರೂಪದಲ್ಲಿ ನಳ-ಕೂಬರರನ್ನೂ, ಬುದ್ಧಿಯಲ್ಲಿ ಅಶ್ವಿನೀ ಕುಮಾರರನ್ನೂ, ತೇಜಸ್ಸಿನಲ್ಲಿ ಸೂರ್ಯಚಂದ್ರರನ್ನೂ ಮಿಗಿಲಿಸುವ ನಾವು, ಇನ್ನು ತ್ರಿಲೋಕಾಧಿಪತಿಗಳಾಗಿ ಅಧಿಕಾರ ನಡೆಯಿಸುವದೊಂದೇ ಉಳಿದಿದೆ.

ಸುಂದ: ಹೂಂ, ಆದಿರಲಿ! ಎಲ್ಲಿ ನಮ್ಮ ಆಸ್ಥಾನಕವಿಗಳು? ಬರಲಿ. ಏ, ಯಾರಲ್ಲಿ?

ದೂತ: (ಪ್ರವೇಶಿಸಿ) ಏನಪ್ಪಣೆ ಮಹಾಪ್ರಭು?

ಸುಂದ: ನಮ್ಮ ಆಸ್ಥಾನಕವಿಗಳಾದ ಕಿಂಕಿಣಿಪಂಡಿತರನ್ನು ಬರಮಾಡು.

ದೂತ: ಅಪ್ಪಣೆ ಮಹಾಪ್ರಭು! (ಹೋಗುವನು.)

ಕವಿ: (ಪ್ರವೇಶಿಸಿ) ಮಹಾಪ್ರಭುಗಳಿಗೆ ವಂದಿಸಿದ್ದೇನೆ. ಜಯ ವಿಜಯೀ ಭವ!

ಉಪಸುಂದ: ಹುಂ! ಆಗಲಿ ಹೊಗಳಿಕೆ.

ಕವಿ: ಸುಂದೋಪಸುಂದ, ಆಂದಗಳಿಗಂದ, ಛಂದದಲಿ ಛಂದ, ಆನಂದಕಂದಾ, ಈ ಜೋಡಿ ಕೂಡಿ ಓಡಾಡಿ ನೋಡಿ, ಆಡುಗಳ ಕಂಡಲ್ಲಿ ಗಡ್ಡ ತೀಡೀ........

ಉಪಸುಂದ: (ಮಧ್ಯದಲ್ಲಿ ತಡೆದು) ಆದೇಕೆ ಗಡ್ಡ ತೀಡಿ........?

ಕವಿ: ಹಾಂ, ಹಾಂ! ಶಾಂತರಾಗಬೇಕು ಸಣ್ಣ ಮಹಾಪ್ರಭುಗಳು! ಗಡ್ಡವನ್ನು ತೀಡುವುದು ಸಂತೋಷದಿಂದ, ಸಂತೋಷದಿಂದ.

ಉಪಸುಂದ: ಹುಂ, ಹುಂ! ನಡೆಯಲಿ!

ಕವಿ: ಗುಡ್ಡವನ್ನೇರಿ ಅಡ್ಡಡ್ಡ ಹಾದಿ ತೆಪ್ಪಕ್ಕೆ ಬಿದ್ದು ಹೆಡ್ಡನಾದರೂ ದಡ್ಡನಾಗದೇ ಕಂಡೆಡೆಯ ಬಂಡೆಯನ್ನು ಮಂಡೆಯನು ತಡೆಯುತ್ (ಮಂಡೆಯನ್ ತೊಡೆಯುತ್ತ) ಅಂಡಲೆದು ಬೆಂಡಾಗಿ ಕವಿಗಳಿಗೆ ಗಂಡಾಗಿ ಎಲ್ಲ ಗುಂಡಾಗಿ,............

ಸುಂದ: (ಅರ್ಧದಲ್ಲಿ ತಡೆದು) ಏ ಕವಿಗಳೇ! ಉಂಡನ್ನವು ದೊಂಡೆಯಲ್ಲಿ ಸಿಕ್ಕಿಕೊಂಡಿತೇ? ಕಂಡಾಬಟ್ಟೆ ದುಂಡುಬಳಿಸುತ್ತಿರುವಿರಲ್ಲ! ಏನಿದೇನಿದು?

ಕವಿ: ಮಹಾಪ್ರಭುಗಳು ಶಾಂತರಾಗಬೇಕು. ಇದು ನವ್ಯಕಾವ್ಯದ ರೀತಿ. ಸಾಮಾನ್ಯರಿಗೆ ಅರ್ಥ ಆಗುವ ಹಾಗಿಲ್ಲ. ನೀವು ಅಸಾಮಾನ್ಯರು. ನಿಮಗಾಗಿಯೇ ಈ ಕವಿತೆ ರಚಿಸಲ್ಪಟ್ಟದೆ ಪ್ರಭುಗಳು ಶಾಂತರಾಗಿ ಚಿತ್ತೈಸಬೇಕು.

ಉಪಸುಂದ: ಹೂಂ! ಹೂಂ! ನಡೆಯಲಿ.

ಕವಿ: ಪರಮ, ಧರಮ, ಕರಮ, ನಿರಮ, ಘಮಘಮ ಚಪಚಪ ಚಬಚಾ ಎಂದು ಹೊರಡುವ ಕೀರ್ತಿ ನಿಮ್ಮ ಆ ಕೀರ್ತಿ ಈ ಮೂರ್ತಿ ಚಿಕ್ಕದಲ್ಲವೊ ಚಿಕ್ಕದಲ್ಲ.

ಸುಂದ: ಅದೇನದು, ಪಚಪಚ, ಘಮಘಮ?

ಕವಿ: ಮಹಾಪ್ರಭುಗಳು ಶಾಂತರಾಗಬೇಕು. ಅದು ತಮ್ಮ ಕೀರ್ತಿ ಪಸರಿಸುವ ವಿಧಾನ.

ಸುಂದ: ಹಾಂ! ಸರಿಸರಿ! ತಮ್ಮಾ, ಈ ಕವಿಗಳ ಮಾತು ಕೇವಲ ಕುಳಿತು ಉಣ್ಣುವ ಸೋಮಾರಿಗಳಿಗೆ. ನಾವು ಕೀರ್ತಿಕೇತುವನ್ನು ಕೈಲಾಸದಿಂದ ಕೂರ್ಮನಡಿದಾವಡೆಗಳ ವರೆಗೂ ಹಾರಿಸುವ ಸಿದ್ಧತೆಯಲ್ಲಿರುವಾಗ, ಈ ಒರಟು ಮಾತುಗಳೇಕೆ?

ಉಪಸುಂದ: ಅಣ್ಣಾ, ಸರಿ! ಈ ಕವಿಗಳನ್ನು ಈಗಿಂದೀಗಲೇ ಕಾಳಿಕಾದೇವಿಯ ಮುಂದೆ ಕುರಿಯನ್ನು ಕಡಿದಂತೆ ಕಡಿದುಹಾಕುವಂಥ ಕಟ್ಟಾಜ್ಞೆಯನ್ನು ಹೊರಡಿಸುವೆ! ಏ, ಯಾರಲ್ಲಿ?

ದೂತ: (ಪ್ರವೇಶಿಸಿ) ಏನಪ್ಪಣೆ ಮಹಾಪ್ರಭು?

ಉಪಸುಂದ: ಈ ಕವಿಗಳನ್ನು ಒಡನೆ ಕಾಳಿಕಾದೇವಿಯ ಮುಂದೆ ಕಡಿದುಹಾಕುವಂತೆ ಕಟುಕನಿಗೆ ತಿಳಿಸು.

ದೂತ: ಅಪ್ಪಣೆ ಮಹಾಪ್ರಭು!

(ದೂತರು ಕವಿಯನ್ನು ಧರಧರನೆ ಎಳಕೊಂಡು ಹೋಗುವರು.)

ಸುಂದ: ತಮ್ಮಾ, ರಾಜ್ಯದ ಅಧಿಕಾರವನ್ನು ಮಂತ್ರಿಗಳ ಕೈಗಿತ್ತು ನಾವು ತಪಸ್ಸಿಗಾಗಿ ಹಿಮಗಿರಿಯ ತಪ್ಪಲಿಗೆ ಹೋಗೋಣ. ಅಲ್ಲಿ ವಿರಂಚಿಯನ್ನು ವಿಧವಿಧವಾಗಿ ಮೆಚ್ಚಿಸಿ ವಿಚಿತ್ರವಾದ ವರವನ್ನು ಪಡೆದು ವಿಖ್ಯಾತರಾಗೋಣ. ಬಾ.

ಉಪಸುಂದ: ಅಣ್ಣ, ವಿಖ್ಯಾತರಾಗುವದು ಮಾತ್ರವಲ್ಲ, ಅಜೇಯರಾಗಿ ಅಮರರಿಂದ ವಂದಿಸಿಕೊಳ್ಳೋಣ. ಅಮರರಾಗಿ ಹರಿಹರವಿರಂಚಿಗಳನ್ನೆ ಕೊನೆಗೊಮ್ಮೆ ಕಿತ್ತೊಗೆದು, ಜಗತ್ತಿನಲ್ಲೆಲ್ಲ, ಸುಂದೋಪಸುಂದರಾದ ನಮ್ಮ ಕಾರಭಾರವನ್ನೇ ಸ್ಥಾಪಿಸೋಣ. ಬಾ.

(ಇಬ್ಬರೂ ವಿಕಟ ಅಟ್ಟಹಾಸದೊಡನೆ ಹೋಗುವರು.)

(ತೆರೆ)

## ಎರಡನೆಯ ದೃಶ್ಯ.

(ಕಾಡು. ರಾಕ್ಷಸರು ತಪಸ್ಸನ್ನಮಾಡುತ್ತಿರುವರು.)

ಓಂ ನಮೋ ಹಿರಣ್ಯಗರ್ಭಾಯಃ! (ಹಲವು ಸಲ ಉಚ್ಚರಿಸುವರು. ಬ್ರಹ್ಮನು ಪ್ರವೇಶಿಸುವನು.)

ಬ್ರಹ್ಮ: ರಾಕ್ಷಸಕುಮಾರರೇ, ಎದ್ದೇಳಿ! ನಿಮ್ಮ ಛಲಪೂರ್ಣವಾದ ತಪಸ್ಸಿಗೆ ಮೆಚ್ಚಿದ್ದೇನೆ. ನಿಮ್ಮ ಅಪೇಕ್ಷೆಯನ್ನು ಈಡೇರಿಸಲಿದ್ದೇನೆ.

ಸುಂದ: (ಎಚ್ಚತ್ತು) ತಮ್ಮಾ, ಉಪಸುಂದಾ! ಈ ಬ್ರಹ್ಮನು ಮಹಾ ಮೋಸಗಾರ! ಈತನೊಡನೆ ಬಹಳ ಜಾಗರೂಕತೆಯಿಂದ ವರ್ತಿಸಬೇಕು.

ಉಪಸುಂದ: ಅಣ್ಣಾ, ನೀನಿತ್ತ ಬಾ, ಈ ವಿಧಿಯನ್ನು ಹದಮಾಡುವ ಕೆಲಸ ನನಗಿರಲಿ. (ಬ್ರಹ್ಮನ ಸಮೀಪಕ್ಕೆ ಹೋಗಿ) ದೇವಾ! ನೀವು ನಿಜ ವಾಗಿಯೂ ನಮ್ಮ ತಪಸ್ಸಿಗೆ ಮೆಚ್ಚಿದ್ದಿರೇ? ನಾವು ಕೇಳುವ ವರವನ್ನು ಕರುಣಿಸಲು ಸಿದ್ಧರಾಗಿರುವಿರೇ?

ಬ್ರಹ್ಮ: ಅದರಲ್ಲಿ ಇನ್ನೂ ಸಂದೇಹವೇ? ಇಲ್ಲವಾದರೆ ನಾನು ನಿಮಗೆ ಕಾಣಿಸಿಕೊಳ್ಳುತ್ತಿದ್ದೆನೇ?

ಸುಂದ: ಹಾಗಾದರೆ ನಮಗೆ ಅಮರತ್ವದ ವರವನ್ನೀಯು ದೇವಾ!

ಬ್ರಹ್ಮ: ವೀರರೇ, ಎಂಥ ಮಾತಿದು! ಅಣಿಮಾದಿ ಅಷ್ಟಸಿದ್ಧಿಗಳನ್ನು ಜಗತ್ತಿನ ಇತರ ಸುಖಸೌಕರ್ಯಗಳನ್ನು ಮರೆತು, ಅಮರತ್ವವನ್ನು ಅಪೇಕ್ಷಿಸಿರುವಿರಲ್ಲ! ಅಮರತ್ವವು ಕೊಡಲಾಗುವುದಿಲ್ಲ. ಅದು, ತಾನಾಗಿಯೇ ಸಿದ್ಧಿಸಬೇಕಾದುದು. ಅಲ್ಲದೆ ಹುಟ್ಟಿದವನಿಗೆ ಸಾವು ಕಟ್ಟಿಟ್ಟುದುದು. ಪ್ರಕೃತಿನಿಯಮಕ್ಕೆ ವಿರುದ್ಧವಾದುದನ್ನು ನಾನು ಕೊಡಲಾಗುವುದಿಲ್ಲ. ಅಮರತ್ವವನ್ನುಳಿದು ಇನ್ನೇನನ್ನಾದರೂ ಕೇಳಿ.

ಸುಂದ: ಹಾಗಾದರೆ, ನಮಗೆ ಪರಸ್ಪರರಿಂದಲ್ಲದೇ ಅನ್ಯರಿಂದ ಮರಣವು ಬರದಂತೆ ವರವನೀಡು ದೇವಾ!

ಬ್ರಹ್ಮ: ತಥಾಸ್ತು!

ಉಪಸುಂದ: ಅಂತೆಯೇ ಜಗತ್ತಿನ ಎಲ್ಲಾ ಶಕ್ತಿಯುಕ್ತಿ, ಮಂತ್ರ-ತಂತ್ರ, ಇಂದ್ರಜಾಲ-ಮಹೇಂದ್ರಜಾಲ ಮೊದಲಾದ ಎಲ್ಲ ವಿದ್ಯೆಗಳಲ್ಲಿಯೂ ಪರಿಣತರಾಗುವಂತೆ ವರನೀಡು, ದೇವಾ!

ಬ್ರಹ್ಮ: ತಥಾಸ್ತು! (ಹೋಗುವನು.)

ಸುಂದ: ಹ್ಹಹ್ಹಹ! ಅಮರತ್ವವನ್ನು ನೀಡುವುದೆಂದರೇನು? ಪರಸ್ಪರ ರಲ್ಲಿಯೇ ಮರಣ ಸಂಭವಿಸುವಂತೆ ವರನೀಡುವದೆಂದರೇನು? ತಮ್ಮಾ, ಬ್ರಹ್ಮನೆಂತಹ ಬೆಪ್ಪ!

ಉಪಸುಂದ: ಬ್ರಹ್ಮನ ಬೆಪ್ಪುತನವಲ್ಲದಿದ್ದರೆ, ನಮ್ಮಂಥವರಿಗೆ ಅವ ಕಾಶವಾದರೂ ಎಲ್ಲಿಂದ ಬರಬೇಕು? ಹ್ಹಹ್ಹಹ! ಬಾ, ಇನ್ನು ಜಗತ್ತಿನ ಯಾವ ಶಕ್ತಿಗಳೂ ನಮ್ಮನ್ನು ತಡೆಯಲಾರವು. ಹರಿಹರಬ್ರಹ್ಮಾದಿಗಳು ನಮ್ಮ ಊಳಿಗದಾಳುಗಳು. ಬಾ, ಜಗತ್ತನ್ನೆ ಗೆಲ್ಲೋಣ! ಸಪ್ತಸಾಗರ ಗಳನ್ನು ಕುಡಿಯೋಣ!

ಸುಂದ: ಮೇರುಪರ್ವತವನ್ನು ಗಿರಗಿರನೆ ಬುಗರಿಯಂತೆ ತಿರುಗಿ ಸೋಣ. ಸುರಸೂಳೆಯರನ್ನು ಬರಸೆಳೆದು ಮಾರಿಗೆ ಬಲಿಕೊಡೋಣ.

(ತೆರೆ.)

## ಮೂರನೆಯ ದೃಶ್ಯ.

(ಕೆಲವು ಬ್ರಾಹ್ಮಣರನ್ನು ಪೀಡಿಸುವದು.)

## ನಾಲ್ಕನೆಯ ದೃಶ್ಯ

(ಇಂದ್ರನ ಸಭೆ.)

ಇಂದ್ರ: ಅಯ್ಯೋ, ಈ ಸುರಲೋಕದ ಸಂಪತ್ತಿಗೆಯಲ್ಲಿ ಕುಳಿತ ಸುರೇಂದ್ರನು ಸುಖವೆಂಬುದನ್ನು ಸ್ವಲ್ಪವಾದರೂ ಕಂಡರೆ ಅನವರತವೂ, ದುಷ್ಟರಾದ ದೈತ್ಯರಿಂದ ಪೀಡಿಸಿಕೊಂಡು ಒಂದುದಿನವೂ ಸುಖವಾಗಿ ಕಣ್ಮುಚ್ಚಿ ಮಲಗಿರಲಿಲ್ಲ. ಆದರಿಂದಲೇ ನಾವು ಅನಿಮಿಷರಾದುದು. ಅಯ್ಯೋ, ನಮ್ಮ ರಕ್ಷಕನಾದ ವಿರಂಚಿಯಿಂದ ವಿಚಿತ್ರ ವರವನ್ನು ಪಡೆದು, ಜಗತ್ತನ್ನೆ ತಮ್ಮ ಕ್ರೂರಕೃತ್ಯಗಳಿಂದ ಸುಡುತ್ತಿರುವ ಈ ದುಷ್ಟದೈತ್ಯರಾದ ಸುಂದೋಪಸುಂದರು, ಸ್ವರ್ಗದ ಸುವಸ್ತುಗಳೆಲ್ಲವನ್ನು ಸೂರೆಗೊಂಡರು. ಗುರುಗಳೇ, ಈಗ ಬಂದಿರುವ ಆಪತ್ತನ್ನು ಹೇಗೆ ಪರಿಹರಿಸುವದು?

ಬೃಹಸ್ಪತಿ: ಇಂದ್ರಾ, ಬೆದರಬೇಡ! ನಿನಗೆ ಬಂದಿರುವ ಈ ಸುರ ಲೋಕದ ಪಟ್ಟವು ನಿನ್ನೊಬ್ಬನ ಪ್ರಯತ್ನದಿಂದ ಬಂದಿದ್ದಲ್ಲ. ತ್ರಿಮೂರ್ತಿ

ಗಳ ಕೃಪಾಕಟಾಕ್ಷಗಳಿಂದ ನೆಲೆನಿಂತಿರುವ ಈ ಸುರಲೋಕವು, ಅವರುಗಳ ದಯೆಯಿಂದಲೇ ಸುರಕ್ಷಿತವಾಗುವದರಲ್ಲಿ ಸಂದೇಹವಿಲ್ಲ. ಸುರಸಮೂಹವನ್ನು ಸೇರಿಕೊಂಡು, ಸತ್ಯಲೋಕದ ಕಡೆಗೆ ಹೋಗೋಣ.

(ಬ್ರಾಹ್ಮಣರು ಬೊಬ್ಬಿಡುತ್ತಾ ಬರುವರು. ಬೃಹಸ್ಪತಿ ಸಮಾಧಾನಿಸುವನು.)

## ಐದನೆಯ ದೃಶ್ಯ.

(ಸತ್ಯಲೋಕ)

ಬ್ರಹ್ಮ: ಸುಂದೋಪಸುಂದರಂಥ ಕ್ರೂರರಕ್ಕಸರಿಗೆ ವರವಿತ್ತು, ಇಂದಿಗೆ ಜಗತ್ತಿನೆಲ್ಲೆಡೆಯಲ್ಲಿಯೂ 'ತ್ರಾಹಿ, ತ್ರಾಹಿ' ಎಂಬ ಆರ್ತನಾದವು ಕೇಳಿಬರುತ್ತಿದೆ. ವರನೀಡುವುದು ಅನಿವಾರ್ಯವಾಯಿತು. ಇಂದು ಅವರ ಪೀಡೆಯಿಂದ ಜಗತ್ತನ್ನು ರಕ್ಷಿಸುವವರು ಕೂಡ ಅನಿವಾರ್ಯವಾಗಿದೆ. ಅದೋ, ಅತ್ತ ಕಡೆಯಿಂದ ಆರ್ತನಾದವು ಕೇಳಿಬರುತ್ತಿದೆ.

(ಇಂದ್ರನೂ, ಬೃಹಸ್ಪತಿಯೂ, ಬ್ರಾಹ್ಮಣರೂ ಪ್ರವೇಶಿಸುವರು.)

ಇಂದ್ರ: ಪಿತಾಮಹಾ, ಜಗಜ್ಜನಕನೇ, ನಿರ್ಗತಿಕನಾದ ಇಂದ್ರನು, ಕಾಲುಗಳಿಗೆರಗಿ ಬೇಡುತಿದ್ದಾನೆ, ರಕ್ಷಿಸಬೇಕು.

ಬೃಹಸ್ಪತಿ: ವೇದಗಳನ್ನೋದಿರುವ ನಾಲ್ಮೊಗನೇ! ಜ್ಞಾನಗಮ್ಯನೆ! ರಕ್ಷಿಸು, ರಕ್ಷಿಸು!

(ಬ್ರಾಹ್ಮಣರು ನಮಸ್ಕರಿಸುವರು.)

ಬ್ರಹ್ಮ: ಇಂದ್ರಾ, ಬೃಹಸ್ಪತಿ, ದೇವತೆಗಳೇ, ಬ್ರಾಹ್ಮಣರೇ, ಎದ್ದೇಳಿ! ನಿಮ್ಮ ದುಃಖಕ್ಕೆ ಕಾರಣವೇನೆಂದು ಅರಿತಿದ್ದೇನೆ. ಅದಕ್ಕೆ ಕಾರಣನು ನಾನೆ. ಆದುದರಿಂದ ಅದನ್ನು ನಿವಾರಿಸುವ ಕಾರ್ಯದ ಕುರಿತು ವಿಚಾರಿಸುತ್ತಿದ್ದೇನೆ. ಬೃಹಸ್ಪತಿ, ನಿನ್ನ ಅಭಿಪ್ರಾಯವೇನು?

ಬೃಹಸ್ಪತಿ: ಬ್ರಹ್ಮದೇವಾ, ನಾನೇನನ್ನೂ ವಿಚಾರಿಸಲಾರೆ. ನನ್ನಿಂದ ಏನು ಹೇಳಲೂ ಸಾಧ್ಯವಾಗದು. ಎಲ್ಲವನ್ನು ನೀನೆ ಬಲ್ಲವನು. ನೀನೆ ವಿಚಾರಿಸತಕ್ಕದ್ದು.

ಬ್ರಹ್ಮ: ಇಂದ್ರಾ, ಈ ಮದಾಂಧರು ಪರಸ್ಪರರು ಹೊಡೆದಾಡಿಕೊಂಡರಲ್ಲದೇ ಸಾಯುವರಲ್ಲ. ಲೋಕಕಂಟಕರಾದ ಈ ತಾಪಸಿಗಳು, ಹೆಣ್ಣು

ಹೊನ್ನು, ಮಣ್ಣು, ಈ ಮೂರರಲ್ಲೊಂದಕ್ಕೆ ಮರುಳಾಗಲೇಬೇಕು. ಆದ್ದರಿಂದ, (ಯೋಚಿಸುವನು.) ವಿಶ್ವಕರ್ಮಾ!

ವಿಶ್ವಕರ್ಮ: (ಪ್ರವೇಶಿಸಿ, ವಂದಿಸಿ) ದೇವಾ, ಕರೆಯಿಸಿದ ಕಾರಣವೇನು? ಅಪ್ಪಣೆಯಾದರೆ, ಒಡನೆಯೇ ಸೇವೆಗೆ ಸಿದ್ಧನಾಗಿದ್ದೇನೆ.

ಬ್ರಹ್ಮ: (ಕುಳಿತಲ್ಲಿಂದ ಎದ್ದು) ವಿಶ್ವಕರ್ಮಾ, ಕೃತಕಸಿರ್ಮಾಣದಲ್ಲಿ ಮಿಗಿಲಾದ ನಿನ್ನ ಚಮತ್ಕಾರವನ್ನು ದೇವತೆಗಳ ಹಾಗೂ ಲೋಕದ ಹಿತಕ್ಕಾಗಿ ಉಪಯೋಗಿಸಬೇಕಾಗಿದೆ. ಜಗತ್ತಿನಲ್ಲಿ ಈವರೆಗೆ ನಿರ್ಮಾಣವಾಗದ ಹಾಗೂ ಇನ್ನುಮುಂದೆ ನಿರ್ಮಾಣವಾಗದಂಥ ಒಬ್ಬಾಕೆ ಸ್ಫುರದ್ರೂಪಿಣಿಯಾದ ಹೆಣ್ಣು ನಿರ್ಮಾಣವಾಗಬೇಕಾಗಿದೆಯಲ್ಲ! ಏನೆನ್ನುವಿ?

ವಿಶ್ವಕರ್ಮ: ಅಪ್ಪಣೆ ಮಹಾಪ್ರಭು. (ವಂದಿಸಿ ಹೋಗುವನು.)

ಬ್ರಹ್ಮ: ಇಂದ್ರಾ, ಬ್ರಹಸ್ಪತೀ, ಇನ್ನು ಚಿಂತಿಸಬೇಕಾದುದಿಲ್ಲ. ನಿಮ್ಮಗಳ ಕಷ್ಟವೂ ನಿವಾರಣೆಯಾದಂತೆ. ಇನ್ನು ತೆರಳಬಹುದು.

ಇಂದ್ರ: ಬ್ರಹ್ಮದೇವಾ! ಆ ಅಪೂರ್ವ ಲಾವಣ್ಯವತಿಯನ್ನು ನಾನು ನೋಡಬೇಕಲ್ಲಾ!

ಬ್ರಹಸ್ಪತಿ: (ಸಿಟ್ಟಿನಿಂದ) ಇಂದ್ರಾ, ನಿನ್ನ ಕಾಮುಕತನವನ್ನು ಈ ಆಪತ್ಕಾಲದಲ್ಲಿಯೂ ಬಿಡಲಿಲ್ಲವೇ?

ಬ್ರಹ್ಮ: ಇರಲಿ, ಬ್ರಹಸ್ಪತಿಗಳೇ! ನಿಮ್ಮ ಕಾರ್ಯವಾದನಂತರ ಈ ಕನ್ನೆಯು ಸುರಲೋಕದ ಸಂಪತ್ತಿಯಾಗಿ ಬರಲಿದ್ದಾಳೆ.

(ವಿಶ್ವಕರ್ಮನು ತಿಲೋತ್ತಮೆಯೊಡನೆ ಬರುವನು.)

ವಿಶ್ವಕರ್ಮ: ಬ್ರಹ್ಮದೇವಾ! ಇದೋ, ನಿನ್ನಪ್ಪಣೆಯಂತೆ, ಈಕೆಯನ್ನು ಜಗತ್ತಿನ ಸೌಂದರ್ಯರಾಶಿಗಳೆಲ್ಲದರ ತಿಲಾಂಶಸಂಗ್ರಹದಿಂದ ನಿರ್ಮಿಸಿದ್ದೇನೆ. ಬೆಳದಿಂಗಳನಿಂದ ಮೈಯ ಕಾಂತಿಯನ್ನೂ, ಕಮಲದ ಕೋಮಲತೆಯಿಂದ ಶರೀರವನ್ನೂ, ಮಧುವಿನ ಮಾಧುರ್ಯದಿಂದ ಮೃದು ನುಡಿಗಳನ್ನೂ, ವೀಣೆಯಿಂದ ವಾಣಿಯನ್ನೂ, ಹಂಸದಿಂದ ಗಮನವನ್ನೂ, ಮಿಂಚಿನಿಂದ ಎಳೆನಗೆಯನ್ನೂ, ಮರಿದುಂಬಿಗಳಿಂದ ಕಣ್ಣೋಟ, ಮುಗಿಲಿನಿಂದ ತಲೆಗೂದಲು, ಹಾಗೆಯೇ ಇತರ ವಸ್ತುಗಳಿಂದ ಈಕೆಯ ಅಂಗಾಂಗಗಳನ್ನು ನಿರ್ಮಿಸಿದ್ದೇನೆ. ಈಕೆ ತ್ರಿಲೋಕಸುಂದರಿ. ಈಕೆಯ ರೂಪಕ್ಕೆ ಮಾರುಹೋಗದ ಯಾವನೂ ಇರಲಾರನು.

ಇಂದ್ರ: ಆಹಾ! ಏನು ರೂಪಲಾವಣ್ಯ!

ಬೃಹಸ್ಪತಿ: (ಸಿಟ್ಟಿನಿಂದ) ಇಂದ್ರಾ, ತಡೆ!

ಬ್ರಹ್ಮ: ಮಗಳೇ, ತಿಲೋತ್ತಮಾ, ಹೀಗೆ ಬಾ! ಇಂದಿನಿಂದ ನೀನು ಜಗತ್ತಿನ ಜೀವರಾಶಿಗಳ ಮುಂದೆ ಅನುಪಮ ಲಾವಣ್ಯವತಿಯಾದ ತಿಲೋತ್ತಮಾ ಎಂದು ಕರೆಯಿಸಿಕೊಳ್ಳುವೆ.

ತಿಲೋತ್ತಮೆ: ಅಪ್ಪಾ! ಆಶೀರ್ವದಿಸಬೇಕು. ನಿಮ್ಮ ಕೃಪಾಕಟಾಕ್ಷವು ನನ್ನ ಮೇಲಿರಲು, ಅದುವೇ ನನ್ನ ಸೌಭಾಗ್ಯ. ನನ್ನನ್ನು ನಿರ್ಮಿಸಿದ ಕಾರಣವನ್ನು ತಿಳಿಸಿದರೆ, ಈ ಕ್ಷಣವೇ ಆ ಕಾರ್ಯವನ್ನು ಪೂರೈಸುವೆನು.

ಬ್ರಹ್ಮ: ಇಂದ್ರಾ, ಹಾಗೂ ಬೃಹಸ್ಪತಿ! ನೀವಿನ್ನು ತೆರಳಬಹುದು. ಮಗಳೇ, ಹೀಗೆ ಬಾ (ಬರುವಳು).

(ಬೃಹಸ್ಪತಿ, ಇಂದ್ರ ಬ್ರಾಹ್ಮಣರು ನಮಿಸಿ ಹೋಗುವರು).

ಬ್ರಹ್ಮ: ಮಗಳೇ. ವಿಂಧ್ಯಾಚಲದ ತಪ್ಪಲನ್ನು ಬಲ್ಲೆಯಾ?

ತಿಲೋತ್ತಮಾ: ಹೌದು ಅಪ್ಪಯ್ಯ.

ಬ್ರಹ್ಮ: ನೀನು ಅಲ್ಲಿದ್ದು ದುಷ್ಟರಾದ ಸುಂದೋಪಸುಂದರ ಬರವನ್ನು ಕಾಯುತ್ತಿರಬೇಕು.

ತಿಲೋತ್ತಮೆ: ಅಂತೆಯೇ ಆಗಲಿ.

ಬ್ರಹ್ಮ: ಅವರು ಬಂದೊಡನೆಯೇ ಆ ಮತಿಹೀನರ ಮೇಲೆ ಮೋಹದ ಬಲೆ ಬೀಸಿ, ಅವರುಗಳು, ನನಗೆ ತನಗೆಂದು, ನಿನಗಾಗಿ ಹೊಡೆದಾಡುವಂತಾದರೆ ನಿನ್ನ ಹುಟ್ಟಿನ ಉದ್ದೇಶವು ಪೂರ್ತಿಯಾದಂತೆ.

ತಿಲೋತ್ತಮೆ: ಅಪ್ಪಾ, ಜಗಜ್ಜನಕರಾದ ನಿಮ್ಮ ಅನುಗ್ರಹ ಪೊಂದಿರಲು ಅದೆಷ್ಟರ ಕೆಲಸ? ಆಶೀರ್ವದಿಸಬೇಕು.

ಬ್ರಹ್ಮ: ಅಂತೆಯೇ ಆಗಲಿ! ಶುಭಮಸ್ತು!

## ಆರನೆಯ ದೃಶ್ಯ

(ತಿಲೋತ್ತಮೆಯ ಪ್ರವೇಶ.)

ತಿಲೋತ್ತಮೆ: ವಿರಂಚಿಯಿಂದ ಪ್ರೇರಿತಳಾಗಿ ಈ ವಿಂಧ್ಯಾಚಲದ ತಪ್ಪಲಿನ ವನಪ್ರದೇಶಕ್ಕೆ ಬಂದಿದ್ದೇನೆ. ನನ್ನ ಬರವಿನ ಜೊತೆಗೆ ವಸಂತದ ಆಗಮನವೂ ಆಗಿದೆ. ವಾತಾವರಣವೆಲ್ಲವೂ ಶೃಂಗಾರರಸದಿಂದ ತುಂಬಿ

ತುಳುಕುತ್ತಿದೆ. ಇಂದು ದುರುಳರಾದ ಸುಂದೋಪಸುಂದರು ವನವಿಹಾರಕ್ಕಾಗಿ ಇತ್ತ ಕಡೆ ಬರಬಹುದು. ಅಲ್ಲಿ ಆ ಕಡೆ, ಮಾಮರವನ್ನಪ್ಪಿ ಹರಡುವ ಮಲ್ಲಿಕಾಲತೆಗೆ ಒರಗಿ ಮರೆಯಾಗಿ ನಿಲ್ಲುವೆನು. (ಪಕ್ಕಕ್ಕೆ ಹೋಗುವಳು.)

(ಸುಂದೋಪಸುಂದರರ ಪ್ರವೇಶ.)

ಸುಂದ: ತಮ್ಮಾ ಉಪಸುಂದ, ರಮ್ಯವಾದ ಈ ವನಪ್ರದೇಶವನ್ನು ನೋಡು. ನಮ್ಮಂಥ ವೀರರ ಬರುವಿಗಾಗಿಯೇ ವನರಾಣಿಯು ಸಿಂಗರಿಸಿ ಕೊಂಡು, ಸ್ವಾಗತಿಸಲು, ಸಿದ್ಧವಾಗಿ ನಿಂತಂತಿದೆ.

ಉಪಸುಂದ: ಅಲ್ಲಣ್ಣಾ! ಅಲ್ಲಾ! ನಾವು ಬಂದುದನ್ನು ಕಂಡು ಅಡಗಿದ್ದ ವಸಂತನು ಹೆದರಿ ಓಡೋಡಿ ಬಂದು, ತನ್ನ ದೂತರುಗಳಾದ ಮಲ್ಲಿಗೆ, ಕೋಗಿಲೆ, ಮಾಂದಳಿರುಗಳನ್ನು ನಮಗುಡುಗೊರೆಯಾಗಿ ಕೊಟ್ಟು, ನಮ್ಮನ್ನು ಸಂತೈಸಲು ಯತ್ನಿಸುತ್ತಿದ್ದಾನೆ

ಸುಂದ: ಆಹಾ! ಏನೇ ಇರಲಿ! ಆ ಬ್ರಹ್ಮ ನಿಜಕ್ಕು ಬುದ್ಧಿವಂತ. ಅವನ ಕರಚಮತ್ಕಾರವನ್ನು ಮೆಚ್ಚಲೇಬೇಕು.

ಉಪಸುಂದ: ಅಣ್ಣಯ್ಯಾ, ತಡೆ! ಆದೇನು ಯಾವದೋ ಒಂದು ತರವಾದ ಮೋಹಕಸುಗಂಧವು ಅತ್ತಕಡೆಯಿಂದ ಹರಿದುಬರುತ್ತಿದೆಯಲ್ಲಾ! ಅದೇನಿರಬಹುದು?

ಸುಂದ: ತಡೆ, ತಡೆ! ನಾನು ಹೋಗಿ ನೋಡಿಬರುವೆನು (ಹೋಗಿ ನೋಡುವನು). (ಆಶ್ಚರ್ಯದಿಂದ) ಓಹೋ! ಇವಳು ವನದೇವತೆಯೋ ಅಥವಾ ಬಳ್ಳಿಯಲ್ಲಿ ಬಾಗಿ ಬಳುಕಿ ನಿಂತಿರುವ ಅರಳಿದ ಮಲ್ಲಿಗೆಯ ಹೂವೇ?

ಉಪಸುಂದ: (ಅರ್ಧದಲ್ಲಿಯೇ ತಡೆದು) ಇರಲಾರದು. ಅದೇನೆಂದು ನಾನೇ ನೋಡಿಬರುವೆ. (ಹತ್ತಿರ ಹೋಗುವನು. ನೋಡಿ ಹಿಂತಿರುಗುವನು). ಓಹೋ, ಇವಳು ಹೆಣ್ಣು! ಹಾಹಾ! ಇವಳು ಹೆಣ್ಣು! ಹಾಹಾ! ........ಮನಮೋಹಿನಿ! ಜಗತ್ತಿನಲ್ಲಿ ಅತಿ ಸುಂದರವಾದ ವಸ್ತು!

ತಿಲೋತ್ತಮೆ: ಯಾರು, ನಾನೇ? (ಮುಂದೆ ಬರುವಳು).

ಸುಂದ: ಎಲಾ! ಈ ಕೋಮಲಾಂಗಿಯು ಮಾತನ್ನೂ ಆಡುವಳೇ? ತಮ್ಮಾ, ಸ್ವಲ್ಪ ದೂರ ನಿಲ್ಲು.. ನಾನೀಕೆಯನ್ನು ಮಾತಾಡಿಸಿ ಪರಿಚಯ ಮಾಡಿಕೊಂಡು ಬರುವೆನು. ಅದುತನಕ ನೀನಿಲ್ಲೇ ಇರು.

ಉಪಸುಂದ: ಅಣ್ಣಾ, ಇದೆಂಥ ಮಾತು! ಆಕೆಯನ್ನು ಮೊದಲ ಸಲ ಹೆಣ್ಣೆಂದು ಗುರುತಿಸಿದವನು ನಾನು. ಆಕೆಯು ನನ್ನ ಮಾತಿಗಾಗಿಯೇ ಮಾತನಾಡಿದಳು. ಅಂದರೆ ನನ್ನೊಡನೆಯೇ ಮಾತನಾಡಿದಳು. ಅವಳ ಪರಿಚಯುವನ್ನು ಪಡೆಯುಬೇಕಾದವನು ನಾನು.

ಸುಂದ: ತಮ್ಮಾ, ಅಧಿಕಪ್ರಸಂಗ ಮಾತಾಡಬೇಡ! ನೀನಿನ್ನೂ ಚಿಕ್ಕವ. ಹೆಣ್ಣು ಹೇಗಿದ್ದಾಳೆ, ಏಕಿದ್ದಾಳೆ, ಹೆಣ್ಣೆಂದರೇನು, ಎಂಬ ಪರಿಚಯುವು ನಿನಗೆ ಸಾಲದು. ಅಲ್ಲದೆ ಹಿರಿಯುವನಾದ ನಾನೇ ಮಾತನಾಡಿಸುವದು ಧರ್ಮ.

ಉಪಸುಂದ: ಧರ್ಮದ ಮಾತುಗಳನ್ನೆತ್ತಬೇಡಣ್ಣ! ಈ ಮೋಹನಾಂಗಿಯು ನನ್ನನ್ನು ಕಂಡು ಮರುಳಾಗಿದ್ದಾಳೆ. ನನ್ನ ಎಳೆಪ್ರಾಯ, ದಷ್ಟಪುಷ್ಟವಾದ ದೇಹ, ಗಂಭೀರವಾದ ಮುಖಮುದ್ರೆ, ಇವುಗಳೇ ಆಕೆ ಇಲ್ಲಿ ಬರಲು ಕಾರಣವಾದುವು. ಬೇಕಾದರೆ ಕೇಳಿನೋಡು. (ತಿಲೋತ್ತಮೆಯ ಹತ್ತಿರ ಹೋಗಿ) ಮೋಹನಾಂಗಿ, ಅಲ್ಲವೇ?

ತಿಲೋತ್ತಮೆ: ಹೌದು. ನನ್ನ ದೊರೆಯೇ ನೀವು. ತುಂಬಾ....

ಉಪಸುಂದ: ಅಣ್ಣ! ನೋಡಿದೆಯಾ? ಆಹಾ! ಮೋಹನಾಂಗಿ, ನಾನೇ ಧನ್ಯ.

ಸುಂದ: ತಮ್ಮಾ! ಉಪಸುಂದಾ! ಇದೋ ಮೊದಲನೆಯ ಎಚ್ಚರಿಕೆ ಕೊಡುತ್ತಿದ್ದೇನೆ. ನಾನು ನಿನ್ನಣ್ಣ! ನಾನು ಈಕೆಯನ್ನು ಪ್ರೀತಿಸುತ್ತೇನೆ. ಇವಳು ನಿನ್ನ ಅತ್ತಿಗೆಗೆ ಸಮಾನ. ಅತ್ತಿಗೆಯನ್ನು ಕಣ್ಣೆತ್ತಿ ನೋಡುವುದು ಕೂಡ ಪಾಪಕರ. (ದೂಡುವನು. ತಿಲೋತ್ತಮೆಯ ಹತ್ತಿರ ಹೋಗಿ) ಓ ಸುಂದರೀ, ಇದೋ, ತ್ರಿಲೋಕವೀರನಾದ ಈ ಸುಂದನು, ನಿನ್ನ ರೂಪ ಲಾವಣ್ಯಗಳಿಗೆ ಮನಸೋತು, ನಿನ್ನ ಸೇವಕನಾಗಲೂ ಸಿದ್ಧನಾಗಿ ನಿಂತಿದ್ದಾನೆ. ಕರುಣೆದೋರು, ಸನಿಹ ಸೇರು, ಕೃಪೆತೋರು!

ತಿಲೋತ್ತಮೆ: ವೀರನೇ, ನಿನ್ನನ್ನು ಕಂಡಾಕ್ಷಣವೇ ನನ್ನ ಮನಸ್ಸು ಪೂರಾ ನಿನ್ನ ಕಡೆಗೇ ಹರಿದಿದೆ. ನೀನೇ ನನ್ನ ಪ್ರಾಣಕಾಂತ! (ಹತ್ತಿರ ಬರುವಳು.)

ಉಪಸುಂದ: (ಸಿಟ್ಟಿನಿಂದ) ಅಣ್ಣಾ, ಇದೆಂತಹ ಲಜ್ಜೆಗೇಡಿತನ! ನಾನು ನಿನ್ನ ತಮ್ಮ! ತಮ್ಮನ ಮಡದಿಯಾದ ಈಕೆ, ನಿನಗೆ ಮಗಳಂತೆ,

ಈಕೆಯನ್ನು ನೀನೇ ಮೋಹನಾಂಗಿ ಎಂದು ಕರೆಯುವದೂ ತುಂಬಾ ನೀಚ ಕೃತ್ಯ. (ಎಳೆದು ದೂರ ನಿಲ್ಲಿಸುವನು).

ಸುಂದ: ತಮ್ಮಾ! ಬೇಡ, ಇದುವರೆಗೂ ಅನ್ಯೋನ್ಯವಾಗಿದ್ದ ನಾವುಗಳು, ಒಂದು ಹೆಣ್ಣಿನ ಸಲುವಾಗಿ ಕಾದಾಡುವದು ಬೇಡ! ಕೊನೆಯ ಸಲ ಎಚ್ಚರಿಸುತ್ತಿದ್ದೇನೆ! ಈಕೆಯ ಕುರಿತು ನೀನು, ಕನಸಿನಲ್ಲೂ ಯೋಚಿಸಬೇಡ. ನಡೆ ಆಚೆ, ಹೂಂ! ತೊಲಗು! (ನೂಕುವನು).

ಉಪಸುಂದ: (ತಿರುಗಿ ಬರುವನು) ಅಣ್ಣಾ, ಹಿರಿಯವನಾದ ನೀನು ಅವಿವೇಕತನದಿಂದ ವರ್ತಿಸುತ್ತಿರುವೆ. ಬೇಡ. ನನ್ನನ್ನು ಕೆರಳಿಸಬೇಡ! ಈಕೆ ನನ್ನವಳು. (ತಿಲೋತ್ತಮೆಯ ಕಡೆ ನೋಡಿ) ಬಾ ತಿಲೋತ್ತಮಾ!

ತಿಲೋತ್ತಮೆ: ಪ್ರಾಣಕಾಂತ (ಹತ್ತಿರ ಬರುವಳು).

ಸುಂದ: (ಕೋಪದಿಂದ ದುರುಗುಟ್ಟಿ ನೋಡಿ) ಎಲವೋ ಮೂರ್ಖ! ಕಾಮವು ನೆತ್ತಿಗೇರಿ ಹಿರಿಯರ ಮಾತನ್ನು ಮೀರಿ ದುರುಳತನದಿಂದ ವರ್ತಿಸುತ್ತಿಯಾ? ನಡೆಯೆಂದರೆ ನಡೆಯಬೇಕು. ಹೂಂ! ನಡೆ! ಎಲ್ಲಿ ಬೇಕಾದರೆ ತೊಲಗು! ನಿನ್ನ ಸುಟ್ಟ ಮೋರೆಯನ್ನು ತೋರಿಸಬೇಡ! ಎಲ್ಲಾದರೂ ಹಿಂತಿರುಗಿ ಬಂದರೆ, ನಿನ್ನ ಕೈಕಾಲನ್ನು ಕತ್ತರಿಸಿಬಿಡುವೆನು!(ನೂಕುವನು).

ಉಪಸುಂದ: ಅಣ್ಣಾ! ಕತ್ತಿ ಹಿಡಿಯಲು, ಕೈಗಂಟಿನಲ್ಲಿ ಬಲವಿರುವಾತನು ನೀನೊಬ್ಬನೇ ಅಲ್ಲ. ನಮ್ಮ ಶಕ್ತಿಯ ಪರೀಕ್ಷೆಯು ಇಂದೇ ಆಗಲಿ, ಹೂಂ! ಬಾ! ಯಾರ ಕೈಕಾಲು ಕತ್ತರಿಸುವಿಯೋ ನೋಡೋಣ.

ಸುಂದ: ಅಷ್ಟು ಮುಂದುವರಿದೆಯಾ ಮೂರ್ಖ! ಹಾಗಾದರೆ ನಿನಗೆ ಕೊನೆಗಾಲ ಸಮೀಪಿಸಿದಂತೆಯೇ ಸರಿ.

ಉಪಸುಂದ: ಅದನ್ನು ನೋಡಿಯೇ ಬಿಡೋಣ.

(ಇಬ್ಬರೂ ಯುದ್ಧಮಾಡಿ ಮಡಿಯುವರು). ಮಂಗಲಪದ.

ಸಂಪೂರ್ಣ.



# ಅಮೂಲ್ಯ ಧಾರ್ಮಿಕ ಪುಸ್ತಕಗಳು

೧. ಧರ್ಮಶಿಕ್ಷಾ
೨. ಶ್ರೀ ಶಂಕರಾಚಾರ್ಯರ ಜೀವನಚರಿತ್ರೆ
೩. ಶ್ರೀ ಶಂಕರಾಚಾರ್ಯವಿರಚಿತ ಸ್ತೋತ್ರಗಳು
೪. ಅಮರನಾಥ ಯಾತ್ರೆ
೫. ದ್ವಾರಕಾ
೬. ದ್ವಾದಶ ಜ್ಯೋತಿರ್ಲಿಂಗಗಳು
೭. ನಮ್ಮ ವೇದಗಳು
೮. ಶ್ರೀ ಶಂಕರಾಚಾರ್ಯ ವಿರಚಿತ ವಿವೇಕಚೂಡಾಮಣಿ—ಭಾಗ ೧.
೯. ,, ,, ,, —ಭಾಗ ೨.
೧೦. ಶತಪಥ ಬೋಧಾಮೃತ
೧೧. ಕೇನೋಪನಿಷತ್
೧೨. ಈಶಾವಾಸ್ಯೋಪನಿಷತ್
೧೩. ಕೈಲಾಸಮಾನಸ ಸರೋವರ ಯಾತ್ರೆ (ಭಾಗ ೧ ಮತ್ತು ೨).
೧೪. ವೇದಾಂತ ಪ್ರಶ್ನೋತ್ತರೀ
೧೫. ಹಿತೋಪದೇಶ
೧೬. ಅನುಭವ ವೇದಾಂತ—ಈ ಮೇಲಿನ ಅಮೂಲ್ಯ ಧಾರ್ಮಿಕ ಪುಸ್ತಕಗಳು, ಒಂದಾಣೆ ಮಾಲೆಯಲ್ಲಿ ಪ್ರಕಟವಾಗಿವೆ.

## ಪ್ರತಿಯೊಂದಕ್ಕೂ ಒಂದಾಣೆ.

ಮೇಲಿನ ಹದಿನಾರು ಪುಸ್ತಕಗಳನ್ನು ಟಪ್ಪಾಲಲ್ಲಿ ತರಿಸಿಕೊಳ್ಳುವವರು 16 ಪುಸ್ತಕಗಳ ಕ್ರಯ ರೂ. 1 ಮತ್ತು ಅಂಚೆವೆಚ್ಚ 0—5—0ಯನ್ನು ಮನಿಯಾರ್ಡರ್ ಮೂಲಕ ಅಥವಾ ಅಂಚೆಚೀಟುಗಳ ಮೂಲಕ ಕಳಿಸಿ ಕೊಡಬೇಕು. ವಿ. ಪಿ. ಕಳಿಸಲ್ಪಡುವುದಿಲ್ಲ.

## ಒಂದಾಣೆ ಮಾಲೆ,

ಪ್ರಭಾತ ಆಫೀಸು, ರಥಬೀದಿ, ಮಂಗಳೂರು-1.

Edited, Printed & Published by K. V. Shenoy
at The Prabhat Printers, Ltd., Mangalore.